ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಕೊರೋನಾ - 19 ಅವಧಿಯಲ್ಲಿ ಸೀಲ್‌ಡೌನ್ ಮಾಡಿದಾಗ ನಡೆದ ಅವ್ಯವಹಾರದ ಬಗ್ಗೆ

ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) -

137 (147) ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕಾರವಾರ ಜಿಲ್ಲೆಯಲ್ಲಿ ಕೊರೋನಾ ಸೋಂಕಿತರ ವ್ಯಕ್ತಿಯ ಮನೆಯ ಸುತ್ತ ಕಳೆದ 6 ತಿಂಗಳಿಂದ ಸೀಲ್‌ಡೌನ್ ಪದ್ಧತಿ ಜಾರಿಯಲ್ಲಿರುವಾಗ ಸದರಿ ವಿಷಯದಲ್ಲಿ ಬಹಳಷ್ಟು ಅವ್ಯವಹಾರ ಆಗಿರುವುದಾಗಿ ಸಾರ್ವಜನಿಕರಿಂದ ತಿಳಿದು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) ಸದರಿ ಸೀಲ್ ಡೌನ್ ಮಾಡಬೇಕಾದಾಗ ಇರುವ ಮಾನದಂಡವೇನು; (ಸವಿಸ್ತಾರ ವರದಿ ನೀಡುವುದು)

(ಇ) ಜಿಲ್ಲೆಯಲ್ಲಿ ಕಳೆದ 6 ತಿಂಗಳಿಂದ ಎಷ್ಟು ಸೋಂಕಿತ ವ್ಯಕ್ತಿಯ ಮನೆಯ ಸುತ್ತ ಸೀಲ್‌ಡೌನ್ ಮಾಡಿರುತ್ತಾರೆ; ಇದಕ್ಕೆ ಯಾವ ಯಾವ ಸಾಮಗ್ರಿ ಬಳಸಿರುತ್ತಾರೆ; ಎಷ್ಟು ದಿನ ಬಳಸಿರುತ್ತಾರೆ; ಇದಕ್ಕೆ ತಗುಲಿರುವ ವೆಚ್ಚ ಮತ್ತು ಬಿಡುಗಡೆ ಮಾಡಿದ ಅಧಿಕಾರಿಗಳು ಯಾರು? (ತಾಲ್ಲೂಕುವಾರು / ಜಿಲ್ಲಾವಾರು ಸವಿಸ್ತಾರ ಮಾಹಿತಿ ನೀಡುವುದು)